# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1127
ಸದಸ್ಯರ ಹೆಸರು : ಶ್ರೀ ಮರಿತಿಬ್ಬೇಗೌಡ
ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು
ಉತ್ತರಿಸುವ ದಿನಾಂಕ : 13-03-2020

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯ ರಸ್ತೆ ಸಾರಿಗೆ ಇಲಾಖೆಯ ವತಿಯಿಂದ ಹೋಬಳಿ ಕೇಂದ್ರಗಳಲ್ಲಿ ಇದುವರೆವಿಗೂ ನಿರ್ಮಾಣಗೊಂಡಿರುವ ಬಸ್ ನಿಲ್ದಾಣಗಳ ಸಂಖ್ಯೆ ಎಷ್ಟು; | ರಾಜ್ಯ ರಸ್ತೆ ಸಾರಿಗೆ ಇಲಾಖೆಯ ವತಿಯಿಂದ ಹೋಬಳಿ ಕೇಂದ್ರಗಳಲ್ಲಿ ಇದುವರೆವಿಗೂ ನಿರ್ಮಾಣಗೊಂಡಿರುವ ಬಸ್ ನಿಲ್ದಾಣಗಳ ಸಂಖ್ಯೆಯ ಮಾಹಿತಿ ಕೆಳಗಿನಂತಿದೆ:<br>ಸಂಸ್ಥೆ – ಬಸ್ ನಿಲ್ದಾಣಗಳ ಸಂಖ್ಯೆ<br>ಕ.ರಾ.ರ.ಸಾ.ನಿಗಮ – 74<br>ಬೆಂ.ಮ.ಸಾ.ಸಂಸ್ಥೆ – 16<br>ವಾ.ಕ.ರ.ಸಾ.ಸಂಸ್ಥೆ – 67<br>ಈ.ಕ.ರ.ಸಾ.ಸಂಸ್ಥೆ – 44 |
| ಆ | ಸದರಿ ಬಸ್ ನಿಲ್ದಾಣಗಳಲ್ಲಿ ಮೂಲಭೂತ ಸೌಲಭ್ಯಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಹುತೇಕ ಎಲ್ಲಾ ಬಸ್ ನಿಲ್ದಾಣಗಳಲ್ಲಿ ಪ್ರಯಾಣಿಕರಿಗಾಗಿ ಮೂಲಭೂತ ಸೌಕರ್ಯಗಳನ್ನು ಒದಗಿಸಲಾಗಿದೆ. |
| ಇ | ಬಂದಿದ್ದಲ್ಲಿ, ಇರುವ ಮೂಲಭೂತ ಸೌಲಭ್ಯಗಳ ಕೊರತೆಗಳು ಯಾವುವು; (ವಿವರ ನೀಡುವುದು) | ಕೆಲವು ಬಸ್ ನಿಲ್ದಾಣಗಳಲ್ಲಿ ಈ ಕೆಳಕಂಡ ಸೌಲಭ್ಯಗಳ ಅವಶ್ಯಕತೆ ಇರುತ್ತದೆ.<br>• ಸೂಕ್ತ ಒಳಚರಂಡಿ ವ್ಯವಸ್ಥೆ ಹಾಗೂ ಸೆಪ್ಟಿಕ್ ಟ್ಯಾಂಕ್, ಒಳಚರಂಡಿ ವ್ಯವಸ್ಥೆಯನ್ನು ಸ್ಥಳೀಯ ಪಂಚಾಯಿತಿಯಿಂದ ಒದಗಿಸಬೇಕಾಗಿರುತ್ತದೆ.<br>• ಸಾಕಷ್ಟು ನೀರು ಸರಬರಾಜು ವ್ಯವಸ್ಥೆ,<br>• ಶೌಚಾಲಯಗಳ ನವೀಕರಣ<br>• ಹೆಚ್ಚಿನ ಆಸನಗಳ ವ್ಯವಸ್ಥೆ,<br>• ವಿಕಲಚೇತನರಿಗೆ ಅಡೆ-ತಡೆರಹಿತ ವಾತಾವರಣ<br>• ಮಹಿಳೆಯರ ವಿಶ್ರಾಂತಿ ಕೊಠಡಿಗಳು |
| ಈ | ಮುಂದಿನ ವರ್ಷದಲ್ಲಿ ಎಷ್ಟು ಹೋಬಳಿ ಕೇಂದ್ರಗಳಲ್ಲಿ ಬಸ್ ನಿಲ್ದಾಣ ನಿರ್ಮಾಣ ಮಾಡಲು ಸರ್ಕಾರ ಯೋಜನೆ ರೂಪಿಸಿದೆ; ಯೋಜನೆಯ ರೂಪು ರೇಷೆಗಳೇನು? | 2020-21ನೇ ಸಾಲಿನಲ್ಲಿ ವಿಶೇಷ ಅಭಿವೃದ್ಧಿ ಯೋಜನೆಯಡಿಯಲ್ಲಿ ಹಾಗೂ ಮೂಲಭೂತ ಸೌಕರ್ಯ ಅಭಿವೃದ್ಧಿ ಯೋಜನೆಯಡಿಯಲ್ಲಿ ಲಭ್ಯವಾಗುವ ಅನುದಾನದಿಂದ ಈ ಕೆಳಕಂಡ ಹೋಬಳಿ ಕೇಂದ್ರಗಳಲ್ಲಿ ಬಸ್ ನಿಲ್ದಾಣಗಳನ್ನು ನಿರ್ಮಿಸಲು ಯೋಜಿಸಲಾಗಿದೆ.<br>ಆನವಟ್ಟಿ (ಸೊರಬ ತಾಲ್ಲೂಕು), ಕಣಕಟ್ಟೆ (ಅರಸೀಕೆರೆ ತಾಲ್ಲೂಕು), ಸಾವಳಗಿ (ಜಮಖಂಡಿ ತಾಲ್ಲೂಕು), ಗಳತಗಾ (ನಿಪ್ಪಾಣಿ ತಾಲ್ಲೂಕು), ಕುಡಚಿ (ರಾಯಬಾಗ ತಾಲ್ಲೂಕು), ಮಹಾಗಾಂವ (ಕಲಬುರಗಿ ತಾಲ್ಲೂಕು), ಮರಳಿ (ಕುಕನೂರು ತಾಲ್ಲೂಕು), ಕಮಲಾಪುರ (ಹೊಸಪೇಟೆ ತಾಲ್ಲೂಕು) ಹೋಬಳಿ ಕೇಂದ್ರಗಳು.<br>ಅನುದಾನ ಹಾಗೂ ನಿವೇಶನದ ಲಭ್ಯತೆ ಅನುಸಾರ ಯೋಜನೆಯನ್ನು ರೂಪಿಸಲಾಗುವುದು. |

ಸಂಖ್ಯೆ: ಟಿಡಿ 84 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು